(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ.25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್,**

ಪಿ.ಆರ್.453

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

**ವಿಷಯ :** ಅನಧಿಕೃತ ಪಂಪ್‌ಸೆಟ್‌ಗಳನ್ನು ಸಕ್ರಮಗೊಳಿಸುವುದು ಮತ್ತು ಹೊಸ ಪಂಪ್‌ಸೆಟ್‌ಗಳ ವಿದ್ಯುದ್ದೀಕರಣ ಕುರಿತು.

**ಪ್ರಸ್ತಾವನೆ:**

ರಾಜ್ಯದಲ್ಲಿ ಸುಮಾರು 14 ಲಕ್ಷ ಅಧಿಕೃತ ಪಂಪ್‌ಸೆಟ್‌ಗಳು ಸ್ಥಾಪಿತವಾಗಿದ್ದು, ಈ ಬಗ್ಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಅಂದಾಜಿಸಿರುವಂತೆ ಸುಮಾರು 1.35 ಲಕ್ಷಗಳಷ್ಟು ಅನಧಿಕೃತ ಪಂಪ್‌ಸೆಟ್ಟುಗಳಿವೆ ಎಂದು, ಇಂತಹ ಅನಧಿಕೃತ ಪಂಪುಸೆಟ್ಟುಗಳ ಕನೆಕ್ಷನ್ ತೆಗೆದುಹಾಕುವುದು ಕಷ್ಟಕರವಾಗಿದೆ. ಈ ಅನಧಿಕೃತ ಪಂಪ್‌ಸೆಟ್‌ಗಳು ವಿದ್ಯುತ್ತನ್ನು ಪಡೆಯುತ್ತಿದ್ದಾಗ್ಯೂ, ಟ್ರಾನ್ಸ್‌ಫಾರ್ಮರ್‌ಗಳಿಗೆ ಹೆಚ್ಚು ಲೋಡ್ ಆಗುವುದರಿಂದ, ಟ್ರಾನ್ಸ್‌ಫಾರ್ಮರ್‌ಗಳ ವಿಫಲತೆ ಮತ್ತು ಹೆಚ್ಚು ನಷ್ಟ ಉಂಟಾಗಿರುತ್ತದೆಂದು ಸಹ ಗಮನಿಸಲಾಯಿತು. ಈ ಹಿಂದೆ ಸರ್ಕಾರವು ತನ್ನ ಆದೇಶ ಸಂಖ್ಯೆ: ಡಿಇ 59 ಪಿಎಸ್‌ಆರ್ 2003 ದಿನಾಂಕ: 21.10.2003ರಲ್ಲಿ ಒವೈಟಿ ಯೋಜನೆಯಡಿಯಲ್ಲಿ ರೂ. 35,000 ಗಳನ್ನು ಪಾವತಿಸುವ ಪ್ರತಿಯೊಬ್ಬ ಪಂಪ್‌ಸೆಟ್ ಬಳಕೆದಾರರ ಪಂಪ್‌ಸೆಟ್‌ಗಳನ್ನು ಸಕ್ರಮಗೊಳಿಸಲು ತೀರ್ಮಾನಿಸಲಾಗಿತ್ತು. ಆ ನಂತರ, ಈ ಮೊತ್ತವನ್ನು 25,000ಕ್ಕೆ ಇಳಿಸಲಾಯಿತು. ಬಹುತೇಕ ರೈತರಿಗೆ 25,000 ರೂ.ಗಳನ್ನು ನೀಡಲು ಸಾಧ್ಯವಾಗದೇ ಇರುವುದರಿಂದ, ಒವೈಟಿ ಯೋಜನೆಗೆ ನೀರಸ ಪ್ರತಿಕ್ರಿಯೆ ಬಂದಿದ್ದು, ಆದಾಗ್ಯೂ, ಈ ಯೋಜನೆಯಡಿಯಲ್ಲಿ 60,000 ಹೊಸ ಪಂಪ್‌ಸೆಟ್‌ಗಳಿಗೆ ಒವೈಟಿ ಯೋಜನೆಯಲ್ಲಿ ರೂ. 25,000/- ಗಳನ್ನು ಪಾವತಿಸುವ ಪಂಪುಸೆಟ್‌ಗಳ ಬಳಕೆದಾರರಿಗೆ ಟ್ರಾನ್ಸ್‌ಫಾರ್ಮರನ್ನೊಳಗೊಂಡ ಸಂಪರ್ಕವನ್ನು ನೀಡಲು ಅನುಮತಿ ನೀಡಿರುತ್ತಾರೆ. ಈ ಯೋಜನೆಯಲ್ಲಿ ಸುಮಾರು 9,000 ಅರ್ಜಿಗಳು ಮಾತ್ರವೇ ಸ್ವೀಕರಿಸಿದ್ದು, ಅವುಗಳಲ್ಲಿ 3,300 ಅರ್ಜಿದಾರರು ಪೂರ್ಣ ಅಥವಾ ಅಂಶಿಕವಾಗಿ ಪಾವತಿ ಮಾಡಿರುತ್ತಾರೆಂದು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತರವರು ತಿಳಿಸಿರುತ್ತಾರೆ. ಒವೈಟಿ ಯೋಜನೆಯನ್ನು ಜಾರಿ ಮಾಡಿದ ಕಾರಣಕ್ಕಾಗಿ 2004-05ನೇ ಸಾಲಿನಲ್ಲಿ ಹೊಸ ಪಂಪು ಸೆಟ್ಟುಗಳ ವಿದ್ಯುದ್ದೀಕರಣ ಪ್ರಗತಿಯು ಬಹಳ ಕುಂಠಿತವಾಗಿದೆ.

ಪಂಪುಸೆಟ್‌ಗಳ ಬಳಕೆದಾರರು ಅತಿ ಹೆಚ್ಚು ರಿಯಾಯಿತಿ ಪಡೆಯುವ ವರ್ಗಕ್ಕೆ ಸೇರಿರುತ್ತಾರೆ. ಆದಾಯದ ಅಂತರವು ಪ್ರತಿ ವರ್ಷಕ್ಕೆ ರೂ.18,000/- ಗಳಾಗುವುದು. ಪಂಪುಸೆಟ್‌ಗಳಿಗೆ ಸರಬರಾಜು ಮಾಡುವ ವಿದ್ಯುತ್ ಬೆಲೆಯ ಮತ್ತು ಪಡೆಯುವ ಆದಾಯದ ಬೆಲೆಯ ಅಂತರವು ಮತ್ತು ಪ್ರತಿ ರಿಯಾಯಿತಿಯು ಪ್ರತಿ ವರ್ಷಕ್ಕೆ ಸುಮಾರು 2,000 ಕೋಟಿಗಳಾಗುವುದೆಂದು ಅಂದಾಜಿಸಲಾಗಿದೆ. ಅನಧಿಕೃತ ಪಂಪುಸೆಟ್ಟುಗಳನ್ನು ಸಕ್ರಮಗೊಳಿಸಲು ವಿವಿಧ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರೂ ಸಹ ವಿದ್ಯುತ್ ಸರಬರಾಜು ಕಂಪೆನಿಗಳಿಗೆ ರಿಯಾಯಿತಿ ದರದಷ್ಟು ಶುಲ್ಕವನ್ನು ಸಹ ಸಂಗ್ರಹಿಸಲು ಸಾಧ್ಯವಾಗಿರುವುದಿಲ್ಲ. ಅನಧಿಕೃತ ಪಂಪುಸೆಟ್ಟುಗಳನ್ನು ಸಕ್ರಮಗೊಳಿಸಲು ಒವೈಟಿ ಯೋಜನೆಯ ಪದ್ಧತಿಯನ್ನು ಪಾಲಿಸಲು ಒತ್ತಾಯ ಮಾಡದೆ ಒವೈಟಿ ಯೋಜನೆಯನ್ನು ಆಚರಣೆಗೆ ತರುವ ಮುನ್ನ ಇದ್ದಂತಹ ಕಾರ್ಯವಿಧಾನವನ್ನು ಅಳವಡಿಸಿಕೊಳ್ಳಲು ಮತ್ತು ಪ್ರತಿ ಅನಧಿಕೃತ ಪಂಪುಸೆಟ್ಟನ್ನು ಸಕ್ರಮಗೊಳಿಸಲು ರೂ.10,000/- ಗಳ ಶುಲ್ಕವನ್ನು ವಿಧಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತರವರು ಪ್ರಸ್ತಾಪಿಸಿರುತ್ತಾರೆ. ಸರ್ಕಾರದ ಮಟ್ಟದಲ್ಲಿ ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸಚಿವ ಸಂಪುಟದ ಸಭೆಯ ತೀರ್ಮಾನದಂತೆ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಪಿಎಸ್‌ಆರ್ 2004, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2005**

ಮೇಲಿನ ಪ್ರಸ್ತಾವನೆಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಲ್ಲಾ ವಿದ್ಯುತ್ ಸರಬರಾಜು ಕಂಪೆನಿಗಳಿಗೆ ಈ ಕೆಳಕಂಡಂತೆ ಕ್ರಮ ಕೈಗೊಳ್ಳಲು ಆದೇಶಿಸಲಾಗಿದೆ.

ಎ) ಓವೈಟಿ ಯೋಜನೆಯನ್ನು ಅನುಸರಿಸದೆ ದಿನಾಂಕ: 31.12.2004ರಲ್ಲಿ ಅಸ್ತಿತ್ವದಲ್ಲಿರುವ ಎಲ್ಲಾ ಅನಧಿಕೃತ ಪಂಪುಸೆಟ್‌ಗಳನ್ನು ಸಕ್ರಮಗೊಳಿಸುವುದು ಮತ್ತು ವಾಡಿಕೆಯಂತೆ ಪಾವತಿಸುವ ವಾರ್ಷಿಕ ಕನಿಷ್ಠ ಠೇವಣಿ ಮತ್ತು ಮೀಟರ್‌ನ ಭದ್ರತಾ ಠೇವಣಿಯೊಂದಿಗೆ ಪ್ರತ್ಯೇಕವಾಗಿ ಪ್ರತಿ ಪಂಪು ಸೆಟ್‌ಗಳನ್ನು ಸಕ್ರಮಗೊಳಿಸಲು ರೂ. 10,000/- ಗಳನ್ನು ಸಂಗ್ರಹಿಸುವುದು.

ಬಿ) ಅನಧಿಕೃತ ಪಂಪುಸೆಟ್‌ಗಳನ್ನು ಸಕ್ರಮಗೊಳಿಸಲು ಎಸ್ಕಾಂಗಳಿಗೆ ಏಕಕಾಲಿಕ ಸಹಾಯವಾಗಿ (One time support) ರೂ.173.66 ಕೋಟಿಯನ್ನು ಮಂಜೂರು ಮಾಡುವುದು.

ಸಿ) ಸಕ್ರಮಗೊಳಿಸುವ ಈ ಯೋಜನೆಯನ್ನು ರೈತರಿಗೆ ಕೊನೆ ಅವಕಾಶವಾಗಿ ಪ್ರಕಟಿಸುವುದು ಮತ್ತು ಈ ಯೋಜನೆಯನ್ನು 30.04.2005ರ ನಂತರ ವಿಸ್ತರಿಸದಿರುವುದು.

ಡಿ) ಈ ಹಿಂದೆ ಆಚರಣೆಯಲ್ಲಿದ್ದ ಓವೈಟಿ ಯೋಜನೆಯನ್ನು ಹಿಂದಕ್ಕೆ ಪಡೆದು 2005-06ನೇ ಸಾಲಿನಲ್ಲಿ ರೂ. 232.03 ವೆಚ್ಚದಲ್ಲಿ 60,000 ಹೊಸ ಪಂಪುಸೆಟ್‌ಗಳಿಗೆ ವಿದ್ಯುತ್ ಸಂಪರ್ಕವನ್ನು ನೀಡುವುದು.

ಇ) 60,000 ಹೊಸ ಪಂಪು ಸೆಟ್‌ಗಳಿಗೆ ವಿದ್ಯುತ್ ಸಂಪರ್ಕವನ್ನು ನೀಡುವ ಸಲುವಾಗಿ ಸರ್ಕಾರದಿಂದ ಸಹಾಯವಾಗಿ ರೂ.60 ಕೋಟಿಗಳನ್ನು ಮಂಜೂರು ಮಾಡುವುದು. ಉಳಿದ ವೆಚ್ಚವಾದ ರೂ. 172.03 ಕೋಟಿಗಳನ್ನು ವಿದ್ಯುತ್ ಸರಬರಾಜು ಕಂಪೆನಿಗಳೇ ಭರಿಸುವುದು.

ಎಫ್) ಓವೈಟಿ ಯೋಜನೆಯಂತೆ ಹೊಸ ಪಂಪುಸೆಟ್‌ಗಳ ವಿದ್ಯುದ್ದೀಕರಣಗೊಳಿಸುವುದನ್ನು ಕೇವಲ ಐಚ್ಛಿಕವನ್ನಾಗಿಸುವುದು.

ಜಿ) ಸಕ್ರಮಗೊಳಿಸಲಾದ ಎಲ್ಲಾ ಪಂಪುಸೆಟ್ಟುಗಳ ಸಂಪರ್ಕಗಳಿಗೆ ಮತ್ತು ಹೊಸದಾಗಿ ಸಂಪರ್ಕ ನೀಡಲಾದ ಪಂಪುಸೆಟ್ಟುಗಳಿಗೆ ಕಡ್ಡಾಯವಾಗಿ ಮೀಟರ್‌ನ್ನು ಅಳವಡಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.456

## ENERGY SECRETARIAT

**Sub :** Transfer of 68.8 M.W. Wind Power Capacity in favour of M/s Enercon Wind Farms (Hindustan) Private Limited,-orders relating to.

**Read :**
1. Government Order No. EN 26 NCE 1999, dated: 13.5.1999.
2. Government Order No. EN 245 NCE 2002, dated: 26.10.2002.
3. Letter No. KRED/08/EWF/(H)PL/2005/583, dated: 24.3.2005, received from the Managing Director, Karnataka Renewable Energy Development Limited, Bangalore.

**Preamble:**

In the Government Order dated: 26.10.2002 read at (2) above, sanction was accorded for implementation of 70.5 M.W. capacity Wind Power Project at Tumkur & Chitradurga District, to M/s J.N. Investments & Trading Company Limited.

2) Now, the Managing Director, Karnataka Renewable Energy Development Limited, Bangalore, in his letter dated: 24.3.2005 read at (3) above, has recommended to Government for transfer of 68.8 M.W. Wind Power capacity in favour of M/s Enercon Wind Farms (Hindustan) Private Limited, at Tumkur & Chitradurga Districts, from out of the sanctioned 70.5 M.W. capacity of M/s J.N. Investments & Trading Company Limited.

3) The proposal has been examined and pass the following order:

**Government Order No: EN 83 NCE 2005, Bangalore, dated: 28th March 2005**

Government are pleased to accord sanction for transfer of 68.8 M.W. Wind Power capacity in favour of M/s Enercon Wind Farms (Hindustan) Private Limited, at Tumkur & Chitradurga Districts as detailed below from out of 70.5 M.W. Capacity of M/s J.N. Investments & Trading Company Limited, allotted in the Government dated: 26.10.2002.

| Sl. No. | Areas Located closed by | District | Total Capacity in M.W. | Elevation details |
|---|---|---|---|---|
| 1. | Chikkabyaladakere | Chitradurga | 24.0 M.W.<br>09.3 M.W. | North-West to South-East two ridges located on 1044, 954,063 and 899. Latitude-12 42'-46.N Longitute-76 30'-34. E. |
| 2. | Dasaguidi Village | Tumkur | 5.5. M.W. | North-West of Dasagudi with peak 746, 735, 710m and East of Kumbalur 751, 700. |
| 3. | Golarahatti Somanahalli & Timmapanahatti | Tumkur | 30.0 M.W. | East of Somanahalli covered with peaks 800, 826 and 927 meters. Latitude-12 36'-46.N Longitute-76 34'-38. E. |

(5) The terms and conditions of the original allotment made in the Government order read at (1) above are IPSOFACTO applicable.

By Order and in the Name of the Governor of Karnataka,

PR-497

**Suresh B. Krishnappanavar**
Under Secretary to Government,
Energy Department.

**Sub :** Transfer of 3.2 M.W. Wind Power Capacity in favour of M/s. Enercon Wind Farms (Krishna) Ltd.-Orders relating to.

**Read :**
1. Government Order No. DE 20 NCE 2005 dated: 7.2.2005.
2. Letter No. KRED/08/EWF/(K)L/2005/610 dated: 29.03.2005 received from the MD, KREDL, Bangalore.

**Preamble:**

In the Government Order dated: 07.02.2005 read at (1) above, sanction has been accorded for implementation of 21.4 M.W. capacity Wind Power Project at Kappadgudda, Gadag District to M/s. Subhash Projects & Marketing Ltd.

Now, the Managing Director, Karnataka Renewable Energy Development Limited, Bangalore in his letter dated: 29.3.2005 read at (2) above, has recommended to the Government for transfer of 3.2 M.W. Wind Power capacity in favour of M/s. Enercon Wind Farms (Krishna) Ltd., at Hirevaddatti village, Gadag District from out of the sanctioned 21.4 M.W. capacity of M/s. Subhash Projects & Marketing Ltd.,

The proposal has been examined and pass the following order.

**Government Order No. EN 90 NCE 2005 Bangalore dated: 30th March 2005**

Government are pleased to accord sanction for transfer of 3.2 M.W. Wind Power capacity in favour of M/s. Enercon Wind Farms (Krishna) Ltd., at Hirevaddatti village, Gadag District, from out of 21.4 M.W. capacity of M/s. Subhash Projects & Marketing Limited allotted vide Government Order DE 20 NCE 2005 dated: 07.02.2005.

The terms and conditions of the Government Order read at (1) above, shall IPSO FACTO applicable.

By Order and in the Name of the Governor of Karnataka,

PR-498

**Suresh B. Krishnappanavar**
Under Secretary to Government,
Energy Department.

**Sub :** Transfer of 8.8. M.W. Wind Power Capacity in favour of M/s Enercon Wind Farms (Chitradurga) Private Limited,-orders relating to.

**Read :**
1. Government Order No. EN 26 NCE 1999, dated: 13.5.1999.
2. Government Order No. EN 364 NCE 2004, dated: 12.11.2004.
3. Letter No: KRED/08/EWF/(C)L/2005/ 587, dated: 24.03.2005, received from the Managing Director, Karnataka Renewable Energy Development Limited, Bangalore.

**Preamble:**

In the Government Order dated: 12.11.2004 read at (2) above, sanction was accorded for implementation of 19.6 M.W. capacity Wind Power Project at Chitradurga District, to M/s Enercon Wind Farms (India) Limited.

(2) Now, the Managing Director, Karnataka Renewable Energy Development Limited, Bangalore, in his letter dated: 24.3.2005 read at (3) above, has recommended to Government for transfer of 8.8. M.W. Wind Power capacity in favour of M/s Enercon Wind Farms (Chitradurga) Private Limited, at Bharampura village of Hiriyur Taluk, Chitradurga District, from out of the sanctioned 19.6 M.W. capacity of M/s Enercon Wind Farms (India) Limited.

(3) The proposal has been examined and pass the following order.

**Government Order No. EN 85 NCE 2005, Bangalore, dated: 28th March 2005**

Government are pleased to accord sanction for transfer of 8.8. M.W. Wind Power capacity in favour of M/s Enercon Wind Farms (Chitradurga) Private Limited, at Bharampura village of Hiriyur Taluk Chitradurga District from out of 19.6 M.W. capacity of M/s Enercon Wind Farms (India) Limited, allotted in the Government dated: 12.11.2004.

(4) The terms and conditions of the original allotment made in the Government order read at (1) above are **IPSOFACTO** applicable.

By Order and in the Name of the Governor of Karnataka,

PR-499

**Suresh B. Krishnappanavar**
Under Secretary to Government,
Energy Department.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಡಿ. ಕೆಂಪಯ್ಯ, ಪಿ.ಎಸ್.ಐ. ಡಿ.ಪಿ.ಓ. ಬೆಂಗಳೂರು ಜಿಲ್ಲೆರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣೆ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಐ.ಜಿ.ಪಿ. ಕೇಂದ್ರವಲಯ, ಬೆಂಗಳೂರುರವರ ಅ.ಸಂ.ತನ್ನಿ:ಡಿಇ:2001-02, ಓಬಿ ಸಂ 213:2001-02 ದಿ:27.3.02.
2. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಅ.ಸಂ. ಅಪೀಲು (6) 16:2002-03 ದಿನಾಂಕ:4.1.2003.
3. ಅರ್ಜಿದಾರರ ಮನವಿ ದಿನಾಂಕ: 30.5.2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂ ಅಪೀಲು (2)32:2002-03 ದಿ: 5.3.2004.

**ಪ್ರಸ್ತಾವನೆ:**

ಶ್ರೀ ಡಿ. ಕೆಂಪಯ್ಯ, ಪಿ.ಸ್.ಐ. ಸಾತನೂರು ಪೊಲೀಸ್ ಠಾಣೆ ಬೆಂಗಳೂರು ಜಿಲ್ಲೆ ರವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷಾರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪ**

"1) ಸಾತನೂರು ಪೊಲೀಸ್ ಠಾಣೆ ಮೊ.ಸಂ:38:2000 ಕಲಂ 80 ಕರ್ನಾಟಕ ಪೊಲೀಸ್ ಕಾಯ್ದೆ ಪ್ರಕರಣದ ತನಿಖಾಧಿಕಾರಿಯಾಗಿ ಪ್ರಕರಣ ದೋಷಾರೋಪಣ ಪಟ್ಟಿಯ ಕಲಂ 12 ರಲ್ಲಿ ಕಂಡ 17ನೇ ಆರೋಪಿ ಎ.ಸಿ. ಚಿಕ್ಕಣ್ಣ ಎಂಬುವರು ಮನೆ ನಂ 149:1 ರಲ್ಲಿ 16 ಜನ ಆರೋಪಿಗಳಿಗೆ ಅಂದರೆ ಬಾಹರ್ ಇಸ್ಪೀಟ್ ಜೂಜಾಟ ಆಡಲು ಅವಕಾಶ ಮಾಡಿಕೊಟ್ಟಿರುವುದರ ಮೂಲಕ ಕಲಂ 79 ಕರ್ನಾಟಕ ಪೊಲೀಸ್ ಕಾಯ್ದೆ ರೀತ್ಯಾ ಅಪರಾಧ ಎಸಗಿರುವುದು ಸಾಕ್ಷ್ಯಾಧಾರಗಳಿಂದ ವ್ಯಕ್ತಪಟ್ಟಿದ್ದರೂ ಸಹ ದೋಷಾರೋಪಣೆ ಪಟ್ಟಿಯ ಕಲಂ 17ರಲ್ಲಿ 17ನೇ ಆರೋಪಿ ಎ.ಸಿ. ಚಿಕ್ಕಣ್ಣರವರ ವಿರುದ್ಧ ಕಲಂ 79 ಕರ್ನಾಟಕ ಪೊಲೀಸ್ ಕಾಯ್ದೆಗೆ ಸಂಬಂಧಪಟ್ಟ ಪ್ರತ್ಯೇಕ ಆರೋಪವನ್ನು ಬರೆಯದೇ ದೋಷಪೂರಿತ ದೋಷಾರೋಪಣೆ ಪಟ್ಟಿಯನ್ನು ಘನ ನ್ಯಾಯಾಲಯಕ್ಕೆ ಸಲ್ಲಿಸುವುದರ ಮೂಲಕ ಕರ್ತವ್ಯ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನದ ಬಗ್ಗೆ.

2) ಈ ಪ್ರಕರಣಕ್ಕೆ ಸಂಬಂಧಿಸಿದ ಜೂಜಾಟದ ಕೇಂದ್ರದ ಮನೆಯ ಶ್ರೀ ಎ.ಸಿ. ಚಿಕ್ಕಣ್ಣರವರದೆಂಬುದು ನಿಜ. ಆದರೆ ಅವರು ಬೆಂಗಳೂರು ಜಯದೇವ ಆಸ್ಪತ್ರೆಯಲ್ಲಿ ಒಳರೋಗಿಯಾಗಿ ದಾಖಲಾಗಿ ದಿನಾಂಕ: 16.6.2000 ರಂದು ಶಸ್ತ್ರ ಚಿಕಿತ್ಸೆಗೆ ಒಳಪಟ್ಟಿದ್ದರೂ ಸಹ ದೋಷಾರೋಪಣ ಪಟ್ಟಿಯ 17ನೇ ಕಲಂನಲ್ಲಿ ದಿ:17.6.2000 ರಂದು ಸಂಜೆ 5-00 ಗಂಟೆಯಲ್ಲಿ ಅಂಕಣ 12 ರಲ್ಲಿ ಕಂಡ ಆರೋಪಿಗಳು ರೂ. 7600-00 ಹಣವನ್ನು ಪಣವಾಗಿ ಕಟ್ಟಿಕೊಂಡು ಅಂದರ್ ಬಾಹರ್ ಆಡುತ್ತಿದ್ದರೆಂದು ಶ್ರೀ ಎ.ಸಿ. ಚಿಕ್ಕಣ್ಣ ರವರನ್ನು ಸೇರಿಸಿ ಅವರನ್ನು ತಲೆಮರೆಸಿಕೊಂಡಿರುವ ಆರೋಪಿಯೆಂದು ಅವರ ಮೇಲೆ ದೋಷಾರೋಪಣೆ ಹೊರಿಸಿ ನ್ಯಾಯಾಲಯಕ್ಕೆ ದೋಷಾರೋಪಣ ಪಟ್ಟಿಯನ್ನು ಸಲ್ಲಿಸಿರುವುದರ ಮೂಲಕ ಇವರ ಕರ್ತವ್ಯ ನಿರ್ಲಕ್ಷ್ಯತೆ ಬೇಜವಾಬ್ದಾರಿ ಬಗ್ಗೆ.

3) ಪ್ರಕರಣಕ್ಕೆ ಸಂಬಂಧಿಸಿದಂತೆ ಜೂಜಾಟದ ಕೇಂದ್ರದ ಮೇಲೆ ದಾಳಿ ನಡೆಸಲು ಪೋಲಿಸ್ ಉಪಾಧೀಕ್ಷಕರವರಿಂದ ಸರ್ಚ್‌ವಾರೆಂಟ್ ಪಡೆದಿರುವುದಲ್ಲದೆ ಗ್ರಾಮ ಪಂಚಾಯ್ತಿಯಿಂದ ಮನೆಯ ಮಾಲೀಕತ್ವದ ಬಗ್ಗೆ ಮನೆ ಖಾನಷ್ ಮಾರಿ ನಕಲನ್ನು ಪಡೆದಿದ್ದಾಗ್ಯೂ ಸಹ ದೋಷರೋಪಣ ಪಟ್ಟಿಯನ್ನು 14ನೇ ಕಲಂನಲ್ಲಿ ಸರ್ಚ್‌ವಾರೆಂಟ್ ಹಾಗೂ ಮನೆಯ ಖಾನಪ್‌ವಾದಿ ನಕಲನ್ನು ನೀಡಿದ ಅಧಿಕಾರಿಗಳ ಹೆಸರುಗಳನ್ನು ಸಾಕ್ಷಿದಾರರನ್ನಾಗಿ ನಮೂದಿಸದೇ ಹಾಗೂ 17ನೇ ಆರೋಪಿ ಶ್ರೀ ಎ.ಸಿ. ಚಿಕ್ಕಣ್ಣರವರ ಉಪಸ್ಥಿತಿಯ ಬಗ್ಗೆ ಸರಿಯಾಗಿ ವಿಚಾರಣೆ ನಡೆಸದೇ ಪ್ರಕರಣದಲ್ಲಿ ಅಸಮರ್ಪಕ ತನಿಖೆ ನಡೆಸಿರುವುದರ ಮೂಲಕ ಇವರು ಕರ್ತವ್ಯದಲ್ಲಿ ದುರ್ನಡತೆ ಹಾಗೂ ನಿರ್ಲಕ್ಷ್ಯತೆ ಬಗ್ಗೆ."

ಮೇಲ್ಕಂಡ 3 ಆರೋಪಗಳು ಇಲಾಖಾ ವಿಚಾರಣೆಯಲ್ಲಿ ನಿಸ್ಸಂದೇಹವಾಗಿ ಸಾಬೀತಾಗಿರುತ್ತದೆ ಎಂಬ ಇಲಾಖಾ ವಿಚಾರಣೆಯ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಪಿ.ಎಸ್.ಐ. ಹುದ್ದೆಯ ಕನಿಷ್ಟ ಮಟ್ಟಕ್ಕೆ ಸಂಚಿತ ಪರಿಣಾಮವಾಗಿ 2 ವರ್ಷಗಳು ಇಳಿಸಿ ಹೊಸದಾಗಿ ವಾರ್ಷಿಕ ವೇತನ ಬಡ್ತಿಯನ್ನು ಗಳಿಸುವಂತೆ ಆದೇಶಿಸಿರುತ್ತಾರೆ.

ಈ ಆದೇಶದ ಪಿರುದ್ಧ ಸಲ್ಲಿಸಿದ ಮೇಲ್ಮನವಿಯಲ್ಲಿ ಸತ್ಯಾಂಶವಿಲ್ಲವೆಂದು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳು ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿದ್ದು ಅವರ ಮುಖ್ಯ ವಾದಾಂಶಗಳು ಈ ಕೆಳಕಂಡಂತಿವೆ.

1. ಶ್ರೀ ಎ.ಸಿ. ಚಿಕ್ಕಣ್ಣರವರು ಕೊಟ್ಟಿರುವ ಮೆಡಿಕಲ್ ಸರ್ಟಿಫಿಕೇಟ್ ನಿಜವೆಂದು ಪರಿಗಣಿಸಲು ಸಾಧ್ಯವಿಲ್ಲ ವೈದ್ಯಾಧಿಕಾರಿಯವರನ್ನು ಪರಿಶೀಲಿಸಿ ಮಾಡಬೇಕಾಗಿತ್ತು. ಸದರಿಯವರು ಕಟ್ಟಡದ ಮೇಲೆ ದಾಳಿ ಮಾಡಿದಾಗ ಸದರಿಯವರು ಜಯದೇವ ಆಸ್ಪತ್ರೆಯಲ್ಲಿದ್ದವೆಂದು ರುಜುವಾತಾಗಿಲ್ಲ ಆದ್ದರಿಂದ ಅವರನ್ನು ದೋಷಾರೋಪದಲ್ಲಿ ಸೇರಿಸಿರುವುದು ಸೂಕ್ತವಾಗಿದೆ.

2. ಸದರಿ ಜೂಜಾಟ ನಡೆಯುತ್ತಿದ್ದ ಕಟ್ಟಡ ಮಾಲೀಕರು ಶ್ರೀ ಎ.ಸಿ. ಚಿಕ್ಕಣ್ಣನವರಾದ್ದರಿಂದ ಅವರು ಸ್ಥಳದಲ್ಲಿ ಇಲ್ಲದಿದ್ದರೂ ಅವರನ್ನು 17ನೇ ಆರೋಪಿಯನ್ನಾಗಿ ಸೇರಿಸಿರುವುದು ಸೂಕ್ತ ಕ್ರಮ ಎಂದು ಉಳಿದಂತೆ ವಾದಾಂಶಗಳು ಪುನರಾವರ್ತನೆಯಾಗಿದ್ದು ಶಿಸ್ತು ಪ್ರಾಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳು ಈ ಬಗ್ಗೆ ತಮ್ಮ ಆದೇಶಗಳಲ್ಲಿ ಸುದೀರ್ಘವಾಗಿ ಚರ್ಚಿಸಿರುತ್ತಾರೆ. ಜೂಜಾಟ ಆಡುತ್ತಿದ್ದ ಮನೆಯ ಮಾಲೀಕರಾದ ಶ್ರೀ ಎ.ಸಿ. ಚಿಕ್ಕಣ್ಣರವರನ್ನು ಅವರು ಜಯದೇವ ಆಸ್ಪತ್ರೆಯಲ್ಲಿ ಶಸ್ತ್ರ ಚಿಕಿತ್ಸೆ ಪಡೆಯುತ್ತಿದ್ದದನ್ನು ಪರಿಗಣಿಸದೇ ವಿನಾ ಕಾರಣ 17ನೇ ಆರೋಪಿಯಾಗಿ ಚಾರ್ಜ್‌ಷೀಟ್ ದಾಖಲಿಸಿದ್ದು, ಈ ಬಗ್ಗೆ ಶ್ರೀ ಎ.ಸಿ. ಚಿಕ್ಕಣ್ಣರವರು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿದ್ದು ಇದನ್ನು ತೀವ್ರವಾಗಿ ಪರಿಗಣಿಸಿದ ಉಚ್ಚ ನ್ಯಾಯಾಲಯವು ಸದರಿ ಅಧಿಕಾರಿಯ ವಿರುದ್ಧ ಶಿಸ್ತು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದ್ದುದರ ಮೇರೆಗೆ ಇಲಾಖಾ ವಿಚಾರಣೆ ನಡೆಸಿ ಅರ್ಜಿದಾರರಿಗೆ ತಕ್ಕ ದಂಡನೆ ವಿಧಿಸಲಾಗಿದೆ. ಇದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 90 ಪೊಸಿಅ 2003, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ. ಕೆಂಪಯ್ಯ, ಪಿ.ಎಸ್.ಐ. ಡಿ.ಪಿ.ಓ. ಬೆಂಗಳೂರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 12

**ಆರ್. ರಂಗಮಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಶಿಕ್ಷಣ ಸಚಿವಾಲಯ

**ವಿಷಯ:** ಶ್ರೀ ಜಮೀಲ್ ಅಹ್ಮದ್, ಹಿಂದಿನ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಶಿವಮೊಗ್ಗ ಇವರ ಮೇಲಿನ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶಗಳು.

**ಓದಲಾಗಿದೆ:**
1. ದಿನಾಂಕ:8.2.2000ರ ಸರ್ಕಾರಿ ಆದೇಶ ಸಂಖ್ಯೆ:ಇಡಿ 12 ಡಿಜಿಡಿ 2000.
2. ದಿನಾಂಕ:10.7.2000ರ ಆದೇಶ ಸಂಖ್ಯೆ:ಇಡಿ 12 ಡಿಜಿಡಿ 2000.
3. ದಿನಾಂಕ:8.9.2000ರ ಕಾರಣ ಕೇಳುವ ನೋಟೀಸ್ ಸಂಖ್ಯೆ:ಇಡಿ 12 ಡಿಜಿಡಿ 2000.
4. ದಿನಾಂಕ:13.12.2000ರ ಪತ್ರ ಸಂಖ್ಯೆ:ಇಡಿ 12 ಡಿಜಿಡಿ 2000.
5. ದಿನಾಂಕ:1.1.2001ರ ಲೋಕಾಯುಕ್ತ ನಿಬಂಧಕರ ಪತ್ರ ಸಂಖ್ಯೆ:ಎಲ್‌ಓಕೆ:ಎಲ್‌ಸಿ:ಡಿ೯ 11:2000-01.
6. ದಿನಾಂಕ:16.1.2001ರ ಆದೇಶ ಸಂಖ್ಯೆ:ಇಡಿ 12 ಡಿಜಿಡಿ 2000.
7. ದಿನಾಂಕ:5.10.2001ರ ಆದೇಶ ಸಂಖ್ಯೆ:ಇಡಿ 12 ಡಿಜಿಡಿ 2000.
8. ದಿನಾಂಕ:31.7.2003ರ ವಿಚಾರಣಾ ವರದಿ ಸಂಖ್ಯೆ: ಎಲ್‌ಓಕೆ:ಎಆರ್‌೯ 4: ಇಎನ್‌ಕ್ಯೂ 3:2001-02.

**ಪ್ರಸ್ತಾವನೆ:**

ಶ್ರೀ ಜಮೀಲ್ ಅಹ್ಮದ್, ನಿವೃತ್ತ ಉಪನಿರ್ದೇಶಕರು ಇವರು ಹಿಂದೆ ಶಿವಮೊಗ್ಗ ಜಿಲ್ಲೆಯ ಉಪ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕಪ್ಪುಹಲಗೆ ಯೋಜನೆಯಡಿ ಗ್ಲೋಬ್ ಖರೀದಿಯಲ್ಲಿ ಅವ್ಯವಹಾರ, ಶಿಕ್ಷಕರ ವರ್ಗಾವಣೆಯಲ್ಲಿ ಹಾಗೂ ನೇಮಕಾತಿಯಲ್ಲಿ ನಿಯಮಗಳನ್ನು ಉಲ್ಲಂಘಿಸಿ ಅವ್ಯವಹಾರ ಎಸಗಿದ ಇತ್ಯಾದಿ ಆರೋಪಗಳ ಹಿನ್ನೆಲೆಯಲ್ಲಿ ಅವರನ್ನು ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ:8.2.2000ದ ಆದೇಶದಲ್ಲಿ ಶಿಸ್ತುಕ್ರಮ ಬಾಕಿ ಇರಿಸಿ ಅಮಾನತ್ತಿನಲ್ಲಿರಿಸಲಾಗಿತ್ತು. ನಂತರ ದಿನಾಂಕ:10.7.2000ರ ಆದೇಶದಲ್ಲಿ ಶಿಸ್ತುಕ್ರಮ ಬಾಕಿ ಇರಿಸಿ ಸೇವೆಗೆ ಪುನರ್ ಸ್ಥಾಪಿಸಲಾಗಿತ್ತು. ಇವರ ಮೇಲಿನ ಆರೋಪಗಳ ಬಗ್ಗೆ ಶಿಸ್ತುಕ್ರಮ ಜರುಗಿಸಲು ನಿರ್ಧರಿಸಿ ಮೇಲೆ ಓದಲಾದ ಕ್ರ.ಸಂ. (3) ರಲ್ಲಿನ ದಿನಾಂಕ:8.9.2000ರ ಕಾರಣ ಕೇಳುವ ನೋಟೀಸ್ ಮೂಲಕ ಕೆಸಿಎಸ್ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 ರಡಿ ಆರೋಪಣಾ ಪಟ್ಟಿಯನ್ನು ಜಾರಿಮಾಡಿ ಅವರ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ನಿಗದಿತ ಅವಧಿಯೊಳಗೆ ಆಪಾದಿತರು ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸದಿರುವ ಕಾರಣ, ಅವರ ಹೇಳಿಕೆ ಏನೂ ಇಲ್ಲವೆಂದು ಪರಿಗಣಿಸಿ ಆಪಾದನೆಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯಲು ಇಲಾಖಾ ವಿಚಾರಣೆ ನಡೆಸುವುದು ಉಚಿತವೆಂದು ಪರಿಗಣಿಸಿ ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸಲು ನಿರ್ಧರಿಸಿ ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ:13.12.2000ರ ಪತ್ರದಲ್ಲಿ ವಿಚಾರಣಾಧಿಕಾರಿಗಳ ಮತ್ತು ಮಂಡನಾಧಿಕಾರಿಗಳ ಹೆಸರನ್ನು ಸೂಚಿಸುವಂತೆ ಕರ್ನಾಟಕ ಲೋಕಾಯುಕ್ತ ನಿಬಂಧಕರನ್ನು ಕೋರಲಾಗಿತ್ತು. ಮೇಲೆ ಓದಲಾದ ಕ್ರ.ಸಂ. (5)ರ ದಿನಾಂಕ: 1.1.2001ರ ಪತ್ರದಲ್ಲಿ ವಿಚಾರಣಾಧಿಕಾರಿಗಳ ಮತ್ತು ಮಂಡನಾಧಿಕಾರಿಗಳ ಪ್ರಸ್ತಾವನೆಯನ್ನು ಲೋಕಾಯುಕ್ತ ನಿಬಂಧಕರು ಸಲ್ಲಿಸಿರುವ ಮೇರೆಗೆ ದಿನಾಂಕ:16.1.2001ರ ಆದೇಶದಲ್ಲಿ ಹೆಚ್ಚುವರಿ ನಿಬಂಧಕರು (ವಿಚಾರಣೆಗಳು-1) ಕರ್ನಾಟಕ ಲೋಕಾಯುಕ್ತ ಇವರನ್ನು ವಿಚಾರಣಾಧಿಕಾರಿಯಾಗಿಯೂ ಹಾಗೂ ಅವರಿಗೆ ಹೊಂದಿಕೊಂಡಿರುವ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ವಿಚಾರಣಾ ವರದಿಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ನಂತರ ವಿಚಾರಣಾಧಿಕಾರಿಯಾಗಿ ನೇಮಕಗೊಂಡಿರುವ ಹೆಚ್ಚುವರಿ ನಿಬಂಧಕರು (ವಿಚಾರಣೆಗಳು-1) ಇವರು ವರ್ಗಾವಣೆಗೊಂಡ ಕಾರಣ ಅವರ ಬದಲಿಗೆ ಹೆಚ್ಚುವರಿ ನಿಬಂಧಕರು (ವಿಚಾರಣೆಗಳು-4) ಇವರನ್ನು ವಿಚಾರಣಾಧಿಕಾರಿಯಾಗಿ ಹಾಗೂ ಅವರಿಗೆ ಹೊಂದಿಕೊಂಡಿರುವ ಅಧಿಕಾರಿಯನ್ನು ಮಂಡನಾಧಿಕಾರಿಯಾಗಿ ದಿನಾಂಕ: 5.10.2001ರ ಆದೇಶದಲ್ಲಿ ನೇಮಕ ಮಾಡಲಾಗಿತ್ತು.

ವಿಚಾರಣಾಧಿಕಾರಿಗಳು ನಿಯಮಗಳ ಪ್ರಕಾರ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (8)ರ ದಿನಾಂಕ:31.7.2003ರ ಪತ್ರದಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ಶ್ರೀ ಜಮೀಲ್ ಅಹ್ಮದ್ ಅವರ ಮೇಲೆ ಮಾಡಲಾದ ಎಲ್ಲಾ 9 ಆರೋಪಗಳು ವಿಚಾರಣೆಯಲ್ಲಿ ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿದ್ದಾರೆ.

ವಿಚಾರಣಾ ವರದಿಯನ್ನು ಸಂಬಂಧಪಟ್ಟ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಜಮೀಲ್ ಅಹ್ಮದ್ ಅವರನ್ನು ದೋಷಮುಕ್ತರನ್ನಾಗಿ ಮಾಡಲು ನಿರ್ಧರಿಸಿ ಸರ್ಕಾರ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 12 ಡಿಜಿಡಿ 2000, ಬೆಂಗಳೂರು, ದಿನಾಂಕ: 14ನೇ ಡಿಸೆಂಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಜಮೀಲ್ ಅಹ್ಮದ್, ನಿವೃತ್ತ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಮೇಲಿನ ಆರೋಪಗಳಿಂದ ದೋಷಮುಕ್ತರನ್ನಾಗಿ ಆದೇಶಿಸಿದೆ. ಇವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕ.ನಾ.ಸೇ.ನಿಯಮಗಳು 1958 ನಿಯಮ 100(3) ರನ್ವಯ "ಕರ್ತವ್ಯದ ಮೇಲಿದ್ದಂತೆ" ಎಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 13

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು-1,2)

**ವಿಷಯ:** ವಿದ್ಯಾವಿಕಾಸ ಯೋಜನೆಯಡಿ ಸಮವಸ್ತ್ರ ವಿತರಣೆ ಕುರಿತು ಮೌಲ್ಯಮಾಪನ ವರದಿ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳ ಅಧ್ಯಯನ ಸಂಸ್ಥೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಇಡಿ 31 ಯೋಯೋಕಾ 20032, ದಿನಾಂಕ:25.1.2003.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ ಅ4(1) ಯೋ(2)ಕಮೌಮ 32/2002-03, ದಿನಾಂಕ: 27.11.2004.

**ಪ್ರಸ್ತಾವನೆ:**

ವಿದ್ಯಾವಿಕಾಸ ಯೋಜನೆ ಅಡಿಯಲ್ಲಿ ಶಾಲಾ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ಉಚಿತ ಸಮವಸ್ತ್ರ ಸರಬರಾಜಿನ ಮೌಲ್ಯಮಾಪನ ಕಾರ್ಯಕ್ರಮ ಮೇಲೆ (1)ರಲ್ಲಿ ಓದಲಾದ ದಿನಾಂಕ:25.1.2003ರ ಸರ್ಕಾರಿ ಆದೇಶದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳ ಅಧ್ಯಯನ ಸಂಸ್ಥೆ (ಐಸೆಕ್), ಬೆಂಗಳೂರು ಇವರಿಗೆ ವಹಿಸಲಾಗಿತ್ತು. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ:27.11.2004ರ ತಮ್ಮ ಪತ್ರದಲ್ಲಿ ಸಂಸ್ಥೆಯು ಮೌಲ್ಯಮಾಪನ ಕಾರ್ಯವನ್ನು ಪೂರ್ಣಗೊಳಿಸಿ ವರದಿಯನ್ನು ಸಲ್ಲಿಸಿದ್ದು, ಈ ಕಾರ್ಯನಿರ್ವಹಿಸಿದ್ದಕ್ಕಾಗಿ ಸಂಸ್ಥೆಗೆ ರೂ.1,08,337/- ಗಳನ್ನು (ಒಂದು ಲಕ್ಷ ಎಂಟು ಸಾವಿರದ ಮುನ್ನೂರ ಮೂವತ್ತೇಳು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರದ ಅನುಮತಿ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 05 ಯೋಯೋಕಾ 2005, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2005**
**(ಇಡಿ 138 ಸ್ಕೀಮರ (ಯೂನಿಕ್) 2005, ದಿನಾಂಕ:30ನೇ ಮಾರ್ಚ್ 2005)**

ವಿದ್ಯಾವಿಕಾಸ ಯೋಜನೆಯಡಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ಉಚಿತ ಸಮವಸ್ತ್ರ ನೀಡುವ ಕಾರ್ಯಕ್ರಮ ಮೌಲ್ಯಮಾಪನ ನಡೆಸಿ ವರದಿ ಸಲ್ಲಿಸಿದ್ದಕ್ಕಾಗಿ ಬೆಂಗಳೂರಿನ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳ ಅಧ್ಯಯನ ಸಂಸ್ಥೆ (ಐಸೆಕ್)ಗೆ ರೂ.1,08,337/-ಗಳನ್ನು (ಒಂದು ಲಕ್ಷ ಎಂಟು ಸಾವಿರದ ಮನ್ನೂರ ಮೂವತ್ತೇಳು ರೂಪಾಯಿಗಳು) ಮಾತ್ರ ಪಾವತಿಸಲು ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆ ಆಯುಕ್ತರಿಗೆ ಈ ಮೂಲಕ ಅನುಮತಿ ನೀಡುತ್ತದೆ.

ಇದರ ಬಗೆಗಿನ ವೆಚ್ಚವನ್ನು ಲೆಕ್ಕಶೀರ್ಷಿಕೆ 2202-01-109-0-03-221 (ಯೋಜನೆ)ರಲ್ಲಿ ಲಭ್ಯವಿರುವ ಹಣದಿಂದ ಭರಿಸತಕ್ಕದ್ದು.

ಶಿಕ್ಷಣ ಇಲಾಖೆ ಅಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 83 ಐಎಫ್ (ಬಿಎ) 2005, ದಿನಾಂಕ: 15.3.2005ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ್**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ (ಯೋಜನೆ) ಶಿಕ್ಷಣ ಇಲಾಖೆ.

ಪಿ.ಆರ್. 552

**DEPARTMENT OF PERSONNEL AND ADMINISTRATIVE REFORMS SECRETARIAT**

**Sub:** Extension of Special Voluntary Retirement Scheme for surplus employees of the State Government - Reg.

**Read:**
1. G.O.No.DPAR 15 SDE 2003 dated 1st September 2003.
2. G.O.No.DPAR 15 SDE 2003 dated 17th May 2004.
3. G.O.No.DPAR 15 SDE 2003 dated 21st June 2004.
4. G.O.No.DPAR 15 SDE 2003 dated 8th September 2004.

**Preamble:-**

In the Government Order dated 1st September 2003 read at (1) above, the Government of Karnataka had introduced a Special Voluntary Retirement Scheme for the regular State Government Employees who were declared as surplus as per the conditions stipulated therein on an experimental basis for a period of six months starting from 1.9.2003. In the Government Order read at (2) above, the scheme was extended upto 31.5.2004 and certain conditions were relaxed. In the Government order read at (3) and (4) above the scheme was further extended upto 31.8.2004 and 28.2.2005 respectively. The State Government have examined the scheme and following orders are issued.

**Government Order No. DPAR 14 SDE 2004, Bangalore, Dated: 31st March 2005**

After examining all aspects of the case, Government are pleased to order that the scheme of Special Voluntary Retirement Scheme sanctioned in Order dated 1.9.2003 as modified in Government Order dated 17.5.2004 shall be in force for a further period of three months i.e., upto 31.5.2005.

This Order issues with the concurrence of Finance Department vide its U.O. Note No. FD 456 Exp.5/2005 dated 26.3.2005.

By Order and in the name of the Governor of Karnataka,
**K. RAGHURAM BHANDARY**
Under Secretary to Government-2,
Department of Personnel and Administrative Reforms (Service Rules).

P.R. 554

**ಶಿಕ್ಷಣ ಸಚಿವಾಲಯ**

**ವಿಷಯ:** ಡಿ.ಇಡಿ ಕೋರ್ಸಿನ ಪಠ್ಯಕ್ರಮವನ್ನು ಪರಿಷ್ಕರಿಸಿ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ:03-04-2002ರ ಸರ್ಕಾರಿ ಪತ್ರ ಸಂಖ್ಯೆ: ಇಡಿ 11 ಪಿಟಿಐ 2000.
2. ದಿನಾಂಕ:04-02-2005ರ ಸರ್ಕಾರದ ಆದೇಶ ಸಂಖ್ಯೆ: ಇಡಿ 31 ಪಿಟಿಐ 2005.
3. ನಿರ್ದೇಶಕರು, ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಇವರ ದಿನಾಂಕ:9.3.2005ರ ಪತ್ರ ಸಂಖ್ಯೆ:ಟಿಇ/ಡಿ.ಇಡಿ. ಪಠ್ಯಕ್ರಮ ಪರಿಷ್ಕರಣೆ/2004-05.

**ಪ್ರಸ್ತಾವನೆ:**

ಡಾ: ಸಿಸ್ಟರ್ ಲಿಡಿಯಾ ಫರ್ನಾಂಡಿಸ್, ಪ್ರಾಂಶುಪಾಲರು, ಸೆಂಟ್ ಆನ್ಸ್ ಶಿಕ್ಷಣ ಕಾಲೇಜು, ಮಂಗಳೂರು ಇವರ ಅಧ್ಯಕ್ಷತೆಯಲ್ಲಿ ರಚಿಸಿದ್ದ 15 ಜನರ ಶಿಕ್ಷಣ ತಜ್ಞರು ಮಾಡಿದ ಸಮಿತಿ ಶಿಫಾರಸ್ಸುಗಳ ಪ್ರಕಾರ, ಡಿ.ಇಡಿ. ಕೋರ್ಸಿಗೆ ನಿಗದಿಪಡಿಸಿದ್ದ ಪಠ್ಯಕ್ರಮವನ್ನು ಪುನರ್ ಅವಲೋಚಿಸಲು, ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:3.4.2002ರ ಪತ್ರದನ್ವಯ, ಸರ್ಕಾರ ತನ್ನ ಒಪ್ಪಿಗೆಯನ್ನು ತಿಳಿಸಿತು. ಅದರನ್ವಯ, ಎರಡು ವರ್ಷಗಳಿಗೆ ಹೆಚ್ಚುವರಿಯಾಗಿ, 6 ತಿಂಗಳ ನಿಕಟ ಸೇವಾ ತರಬೇತಿಯನ್ನು (ಇಂಟರ್ನ್‌ಷಿಪ್) ನಿಗದಿಪಡಿಸಲಾಯಿತು. ಅದನ್ನು 2002-03ನೇ ಶೈಕ್ಷಣಿಕ ಸಾಲಿನ ತಂಡದಿಂದ ಅನ್ವಯವಾಗಿ ಜಾರಿಗೊಳಿಸಲಾಯಿತು. ಅದರನ್ವಯ, ಎರಡು ವರ್ಷಗಳ ಡಿ.ಇಡಿ. ಕೋರ್ಸನ್ನು ಪೂರೈಸಿದ ಪ್ರಶಿಕ್ಷಕರು 6 ತಿಂಗಳ ಆ ಇಂಟರ್ನ್‌ಷಿಪ್ ಕೋರ್ಸನ್ನು ಪೂರೈಸಬೇಕಾಗಿತ್ತು. ಸದರಿ ಇಂಟರ್ನ್‌ಷಿಪ್ 2004ನೇ ಸಾಲಿನಿಂದ ಮೊದಲ ಬಾರಿಗೆ ಜಾರಿಗೆ ಬಂದಿತು.

2. ಡಿ.ಇಡಿ ಕೋರ್ಸಿನ ಅಂಗವಾಗಿ ನಿಗದಿಪಡಿಸಿದ, ಮೇಲೆ ಉಲ್ಲೇಖಿಸಿದ 6 ತಿಂಗಳ ನಿಕಟ ಸೇವಾ ತರಬೇತಿಯನ್ನು ರದ್ದುಗೊಳಿಸಬೇಕೆಂಬ ಮನವಿಗಳು ಸರ್ಕಾರದಲ್ಲಿ ಸ್ವೀಕೃತವಾಗಿವೆ. ಅದನ್ನು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ, ದಿನಾಂಕ: 4.2.2005ರ ಸರ್ಕಾರದ

ಆದೇಶದನ್ವಯ, ಡಿ.ಇಡಿ. ಕೋರ್ಸಿಗೆ ನಿಗದಿಪಡಿಸಲಾದ ಪಠ್ಯಕ್ರಮವನ್ನು ಪುನರ್ ಅವಲೋಕಿಸಲು ತಜ್ಞರನ್ನೊಳಗೊಂಡ ಪಠ್ಯಕ್ರಮ ಸಮಿತಿಯನ್ನು ರಚಿಸಲು ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು ಇವರಿಗೆ ಸರ್ಕಾರ ನಿರ್ದೇಶಿಸಿತು. ಸದರಿ ಪುನರ್ ಅವಲೋಕನೆಯ ಅಂಗವಾಗಿ, 6 ತಿಂಗಳುಗಳ ಇಂಟರ್ನ್‌ಷಿಪ್‌ನ್ನು ಎರಡು ವರ್ಷಗಳ ಅವಧಿಯೊಳಗೆ ಸರಿದೂಗಿಸಬಹುದೇ ಎಂಬ ಬಗ್ಗೆಯೂ ಸಹಾ ಸದರಿ ಸಮಿತಿಯು ಪರಿಶೀಲಿಸಿ ಅದರ ವರದಿ/ಶಿಫಾರಸ್ಸನ್ನು, ಆದೇಶ ಹೊರಡಿಸಿದ ಒಂದು ತಿಂಗಳೊಳಗೆ ನೀಡುವಂತೆಯೂ ಸಹಾ ತಿಳಿಸಲಾಗಿತ್ತು.

3. ಅದರಂತೆ, ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಇವರ ನೇತೃತ್ವದಲ್ಲಿನ 9 ಜನರ ಸದಸ್ಯರನ್ನೊಳಗೊಂಡಂತೆ ತಜ್ಞರ ಸಮಿತಿಯು ಡಿ.ಇಡಿ. ಕೋರ್ಸಿನ ಪಠ್ಯಕ್ರಮವನ್ನು ಪುನರ್ ಅವಲೋಕಿಸಿ, ಇಂಟರ್ನ್‌ಷಿಪ್ ತರಬೇತಿಯನ್ನು ಎರಡು ವರ್ಷಗಳ ಡಿ.ಇಡಿ. ಕೋರ್ಸಿನ ಅವಧಿಯಲ್ಲಿಯೇ ಮೂರು ತಿಂಗಳ ಅವಧಿಗಾಗಿ ನಿಗದಿಪಡಿಸಬಹುದೆಂಬ ಶಿಫಾರಸ್ಸನ್ನು ಹಾಗೂ ಇತರೆ ಕೆಲವು ಶಿಫಾರಸ್ಸುಗಳನ್ನು ಮಾಡಿದ್ದು, ಅದನ್ನು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸದರಿ ನಿರ್ದೇಶಕರ ಪತ್ರದನ್ವಯ ಸರ್ಕಾರಕ್ಕೆ ತಿಳಿಸಲಾಗಿದೆ.

4. ಸರ್ಕಾರವು, ಮೇಲೆ ಉಲ್ಲೇಖಿಸಿದ ಶಿಫಾರಸ್ಸುಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 31 ಪಿಟಿಐ 2005, ಬೆಂಗಳೂರು, ದಿನಾಂಕ: 28ನೇ ಮಾರ್ಚ್ 2005**

5. ಡಿ.ಇಡಿ. ಪಠ್ಯಕ್ರಮ ಪರಿಷ್ಕರಣೆ ಕುರಿತು ತಜ್ಞರ ಸಮಿತಿಯು ನೀಡಿರುವ ಈ ಕೆಳಕಂಡ ಶಿಫಾರಸ್ಸುಗಳನ್ನು ಜಾರಿಗೊಳಿಸಲು ಅಗತ್ಯ ಕ್ರಮ ಕೈಗೊಳ್ಳತಕ್ಕದೆಂದು ಸರ್ಕಾರ ಈ ಮೂಲಕ ಆದೇಶಿಸಿದೆ:

(1) ಇಂಟರ್ನ್‌ಷಿಪ್ ತರಬೇತಿಗಾಗಿ, ಎರಡು ವರ್ಷಗಳ ಡಿ.ಇಡಿ. ಕೋರ್ಸಿನ ಅವಧಿಯಲ್ಲಿಯೇ ಮೂರು ತಿಂಗಳ ಕಾಲ ನಿಯೋಜಿಸುವುದು.

(2) 2004-05ನೇ ಸಾಲಿನಲ್ಲಿ ದ್ವಿತೀಯ ಡಿ.ಇಡಿ. ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೂ ಶೈಕ್ಷಣಿಕ ವರ್ಷದ ಅವಧಿಯೊಳಗೆ ಇಂಟರ್ನ್‌ಷಿಪ್ ಮುಗಿಸಲು ಅವಕಾಶ ಕಲ್ಪಿಸುವುದು.

(3) ಶಿಕ್ಷಕ ತರಬೇತಿ ಸಂಸ್ಥೆಗಳ ಶೈಕ್ಷಣಿಕ ವರ್ಷದ ಅವಧಿಯನ್ನು 10 ರಿಂದ 12 ತಿಂಗಳುಗಳಿಗೆ ವಿಸ್ತರಿಸುವುದು (ಇಂಟರ್ನ್‌ಷಿಪ್ ಅವಧಿ ಹಾಗೂ ರಜೆ ಅವಧಿಗಳೂ ಸೇರಿ).

(4) ಕಂಪ್ಯೂಟರ್ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಲು ಕಂಪ್ಯೂಟರ್ ಶಿಕ್ಷಣ ಅವಧಿಯನ್ನು 25 ಅವಧಿಗಳಿಂದ 45 ಅವಧಿಗಳಿಗೆ ಹೆಚ್ಚಿಸುವುದು.

(5) ಪ್ರಥಮ ಡಿ.ಇಡಿ. ಪಠ್ಯವಸ್ತುವಿನ ಮೂಲ ಸ್ವರೂಪದಲ್ಲಿ ಯಾವ ಬದಲಾವಣೆಯೂ ಅಗತ್ಯ ಇರುವುದಿಲ್ಲ. ಮೂರು ವರ್ಷಗಳ ಪಠ್ಯವಸ್ತು ಸಂವಹನದ ಅನುಭವದ ಆಧಾರದ ಮೇಲೆ ವಿವಿಧ ವಿಷಯ ಮತ್ತು ಚಟುವಟಿಕೆಗಳಿಗೆ ನಿಗದಿಪಡಿಸಿರುವ ಅವಧಿಗಳ ಮರು ಹಂಚಿಕೆ ಮಾಡುವುದು.

(6) ಅಭ್ಯಾಸ ಬೋಧನೆಯ ಅವಧಿಯನ್ನು 40 ದಿನಗಳಿಂದ 30 ದಿನಗಳಿಗೆ ಸೀಮಿತಗೊಳಿಸುವುದು.

(7) ಮಧ್ಯಂತರ ರಜೆಯನ್ನು ಒಂದು ವಾರಕ್ಕೆ ಸೀಮಿತಗೊಳಿಸುವುದು ಹಾಗೂ ಒಂದು ತಿಂಗಳ ವರ್ಷಾಂತ್ಯದ ರಜೆ ನೀಡುವುದು.

(8) ಪ್ರತಿ ಶಿಕ್ಷಣ ಶಾಸ್ತ್ರಾಧಾರಿತ ಪತ್ರಿಕೆಗೆ ನಿಗದಿಪಡಿಸಿರುವ 125 ಘಂಟೆಗಳ ಅವಧಿಗಳನ್ನು 100 ಘಂಟೆಗಳ ಅವಧಿಗಳಿಗೆ ಸೀಮಿತಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 555

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## HEALTH AND FAMILY WELFARE SECRETARIAT

**Sub:** Conduct of Entrance Test for Admission to M.Sc., Nursing, M.Pharma and MPT Courses in Government Quota in Private Colleges.

**Read:** 1. G.O.No.HFW 44 MPS 2003(P1), dated 3/12/2003.

2. Letter No.MEH (3). 26/2003-2004, dated 9/12/2003 of the Director of Medical Education.

**Preamble:-**

1. Promulgation of Karnataka Selection of Candidates for Admission to M.Sc., Nursing, M.Pharm and MPT, MD Ayurveda, MD Unani and MD Homoeopathy Courses Rules, 2005 is under consideration of Government. The seat sharing ratio as proposed is all the seats in Government Colleges and such percentage of seats as may be determined by Government from time to time in Private Colleges. The admission will be strictly on the basis of an Entrance Test in terms of the ruling contained in the judgement in State of Madhya Pradesh-V/s-Gopal D.Tirthani (2003 AIR SCW 3636). Since there is some delay in the enactment of the proposed rules it is considered necessary to issue orders for conduct of Entrance Test for admission to M.Sc., Nursing, M.Pharma and MPT Courses in the academic year 2005-2006 and the seat sharing ratio of the said PG Courses in Private Colleges and also the fee structure chargeable from the candidates seeking admissions.

**Government Order No.HFW 88 MPS 2005, Bangalore, Dated: 8th April 2005**

2. Pending publication of Karnataka Selection of Candidates for Admission to Post Graduate Para Medical Courses and Indian System of Medicine and Homoeopathy Courses Rules, 2005 Government of Karnataka hereby directs for conduct of Entrance Test for Admission to M.Sc., Nursing, M.Pharm and MPT Courses in the academic year 2005-2006 for admission to the extent of 50% of the intake in each Post Graduate Course in Private Nursing, Pharmacy and Physiotherapy colleges and for all seats in Government Nursing, Pharmacy and Physiotherapy colleges.

3. Rajiv Gandhi University of Health Sciences shall conduct the Entrance Test for admission to the said M.Sc., Nursing, M.Pharm and MPT Courses.

4. 50% of the seats in each M.Sc., Nursing, M.Pharm and MPT Courses offered in the Private Nursing, Pharmacy and Physiotherapy colleges respectively shall be Government seats under Government quota the admission for which shall be through counseling conducted by the Rajiv Gandhi University of Health Sciences on the basis of merit-cum-reservation.

5. The fee structure chargeable from the candidates seeking admission to the above para medical PG Courses shall be notified separately.

By Order and in the name of the Governor of Karnataka,

**S. NAGARAJU**

P.R. 562

Under Secretary to Government,

Health & Family Welfare Department, (Medical Education)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 113 ಆಸೇಇ 2005, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2005**

**ವಿಷಯ:** ಶ್ರೀ ಶಿವನಂಜಯ್ಯ, ಕೆ.ಎ.ಎಸ್. (ಸೂಪರ್ ಟೈಂ ಶ್ರೇಣಿ) ಅಧಿಕಾರಿ ಹಾಲಿ ಸರ್ಕಾರದ ಅಪರ ಕಾರ್ಯದರ್ಶಿ, ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಇವರಿಗೆ ಸಾಮಾನ್ಯ ಭವಿಷ್ಯ ನಿಧಿಯಿಂದ ಭಾಗಶಃ ಹಣವನ್ನು ಅಂತಿಮವಾಗಿ ಹಿಂತೆಗೆಯಲು ಮಂಜೂರಾತಿ ನೀಡುವ ಬಗ್ಗೆ.

ಶ್ರೀ ಶಿವನಂಜಯ್ಯ, ಕೆ.ಎ.ಎಸ್. (ಸೂಪರ್ ಟೈಂ ಶ್ರೇಣಿ) ಅಧಿಕಾರಿ ಹಾಲಿ ಸರ್ಕಾರದ ಅಪರ ಕಾರ್ಯದರ್ಶಿ, ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಇವರಿಗೆ ಬೆಂಗಳೂರಿನ ಹೆಚ್.ಎಸ್.ಆರ್. ಲೇಔಟ್, 6ನೇ ಸೆಕ್ಟರ್‌ನಲ್ಲಿನ ನಿವೇಶನ ಸಂಖ್ಯೆ:333ರಲ್ಲಿ ಮೊದಲನೆ ಅಂತಸ್ತು ನಿರ್ಮಾಣ ಮಾಡಲು ಸಾಮಾನ್ಯ ಭವಿಷ್ಯ ನಿಧಿ ಖಾತೆ ಸಂಖ್ಯೆ: G.A. 16964 ರಿಂದ ರೂ. 3,81,478-00ಗಳನ್ನು (ಮೂರು ಲಕ್ಷದ ಎಂಬತ್ತೊಂದು ಸಾವಿರದ ನಾಲ್ಕುನೂರ ಎಪ್ಪತ್ತೆಂಟು ರೂಪಾಯಿಗಳು) ಭಾಗಶಃ ಅಂತಿಮವಾಗಿ ಹಿಂದಕ್ಕೆ ಪಡೆಯಲು ಕರ್ನಾಟಕ ಸಾಮಾನ್ಯ ಭವಿಷ್ಯ ನಿಧಿ ನಿಯಮಗಳು 1957ರ ನಿಯಮ 24(1)(ಎ) ಹಾಗೂ 25(1)(ಎ)ರನ್ವಯ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 563

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಕಾರ್ಯಕಾರಿ ವಿಭಾಗದಲ್ಲಿನ ಸಾರ್ವಜನಿಕ ಸಂಪರ್ಕಾಧಿಕಾರಿ ಹುದ್ದೆಯನ್ನು ವೇತನ ಶ್ರೇಣಿ ರಹಿತ ಹುದ್ದೆ ಎಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 57 ಸಸಿವಿ 2003 ದಿನಾಂಕ:11.12.2003.

2. ಕಡತ ಸಂಖ್ಯೆ ಸಿಆಸುಇ 341 ಸಿಶಾಸೇ 2004.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1)ರಲ್ಲಿನ ಆದೇಶದನ್ವಯ ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಕಾರ್ಯಕಾರಿ ವಿಭಾಗದಲ್ಲಿ ಸಂದರ್ಶಕರ ನಿಯಂತ್ರಣಕ್ಕಾಗಿ ಎರಡು ಪ್ರತ್ಯೇಕ ಶಾಖೆಗಳನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ಸದರಿ ಹುದ್ದೆಗಳನ್ನು ರೀ-ಡಿಪ್ಲಾಯ್‌ಮೆಂಟ್ ಮೂಲಕ ಭರ್ತಿ ಮಾಡುವ ಷರತ್ತಿಗೊಳಪಟ್ಟು ಸೃಜಿಸಲಾಗಿದೆ.

| | | |
|---|---|---|
| 1. | ಸಾರ್ವಜನಿಕ ಸಂಪರ್ಕಾಧಿಕಾರಿ (ಅಧೀನ ಕಾರ್ಯದರ್ಶಿ : ಶಾಖಾಧಿಕಾರಿ) | 2 ಹುದ್ದೆಗಳು |
| 2. | ಸಹಾಯಕ ಸಾರ್ವಜನಿಕ ಸಂಪರ್ಕಾಧಿಕಾರಿ (ಸಹಾಯಕರು) | 6 ಹುದ್ದೆಗಳು |
| 3. | ಬೆರಳಚ್ಚುಗಾರರು : ಗಣಕ ಯಂತ್ರ ಅಪರೇಟರ್ | 4 ಹುದ್ದೆಗಳು |

ಮೇಲೆ ಓದಲಾಗಿರುವ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಸಿಬ್ಬಂದಿ ವಿಭಾಗದ ಕಡತದಲ್ಲಿ ಸಾರ್ವಜನಿಕ ಸಂಪರ್ಕಾಧಿಕಾರಿ ಹುದ್ದೆಗಳಲ್ಲಿನ ಒಂದು ಹುದ್ದೆಯನ್ನು ವೇತನ ಶ್ರೇಣಿ ರಹಿತ ಹುದ್ದೆ ಎಂದು ಪರಿಗಣಿಸಲು ಪ್ರಸ್ತಾವನೆ ಇದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀ ಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 90 ಸಸಿವಿ 2004, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಕಾರ್ಯಕಾರಿ ವಿಭಾಗದಲ್ಲಿನ ಸಾರ್ವಜನಿಕ ಸಂಪರ್ಕಾಧಿಕಾರಿಗಳು ಎರಡು ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಅಧೀನ ಕಾರ್ಯದರ್ಶಿ ಹುದ್ದೆಯ ವೇತನ ಶ್ರೇಣಿಯನ್ನು ಗರಿಷ್ಟವಾಗಿಟ್ಟುಕೊಂಡು ವೇತನ ಶ್ರೇಣಿ ರಹಿತ ಹುದ್ದೆ ಎಂದು ಪರಿಗಣಿಸುವ ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 343 ವೆಚ್ಚ 5/2005, ದಿನಾಂಕ: 10.3.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 566

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 32 ಸಆಸೇ 2005, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2005**

**ವಿಷಯ:** ಅರಣ್ಯ ಮತ್ತು ಪರಿಸರ ಸಚಿವರ ಆಪ್ತ ಶಾಖೆಯಲ್ಲಿ ಒಂದು ಗ್ರೂಪ್ ಬಿ ಹುದ್ದೆಯನ್ನು ಗ್ರೂಪ್ ಎ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:**
1. ಟಿಪ್ಪಣಿ ಸಂಖ್ಯೆ: ಅಪಜೀಸ/242/2004, ದಿನಾಂಕ:23.12.2004.
2. ಟಿಪ್ಪಣಿ ಸಂಖ್ಯೆ: ಅಪಜೀಸ/51/2005, ದಿನಾಂಕ:14.1.2005.
3. ಟಿಪ್ಪಣಿ ಸಂಖ್ಯೆ: ಅಪಜೀಸ/15/2005, ದಿನಾಂಕ:31.1.2005.
4. ಟಿಪ್ಪಣಿ ಸಂಖ್ಯೆ: ಅಪಜೀಸ/460/2005, ದಿನಾಂಕ:23.3.2005.

ಕ್ರಮ ಸಂಖ್ಯೆ (1) ರಿಂದ (4) ರಲ್ಲಿ ಓದಲಾಗಿರುವ ಟಿಪ್ಪಣಿಗಳಲ್ಲಿ ಮಾನ್ಯ ಅರಣ್ಯ ಮತ್ತು ಪರಿಸರ ಸಚಿವರ ಆಪ್ತ ಶಾಖೆಗೆ ಶ್ರೀ ಸಿ.ಆರ್. ಅಮರನಾಥ್, ಸಹಾಯಕ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್ ಇವರನ್ನು ದಿನಾಂಕ: 5.1.2005 ರಿಂದ ವಿಶೇಷ ಕರ್ತವ್ಯಾಧಿಕಾರಿಯಾಗಿ ನೇಮಿಸುವಂತೆ ಕೋರಲಾಗಿದೆ. ಅರಣ್ಯ ಮತ್ತು ಪರಿಸರ ಸಚಿವರ ಆಪ್ತ ಶಾಖೆಗೆ ಅಧಿಕಾರಿಯವರನ್ನು ನೇಮಿಸಲು ಗ್ರೂಪ್ 'ಎ' ಹುದ್ದೆ ಖಾಲಿ ಇಲ್ಲದಿರುವುದರಿಂದ ದಿನಾಂಕ: 5.1.2005 ರಿಂದ ಜಾರಿಗೆ ಬರುವಂತೆ ಅರಣ್ಯ ಮತ್ತು ಪರಿಸರ ಸಚಿವರ ಪದಾವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಚಿವರ ಆಪ್ತ ಶಾಖೆಯಲ್ಲಿ ಮಂಜೂರಾಗಿ ಖಾಲಿ ಇರುವ ಗ್ರೂಪ್ 'ಬಿ' ಹುದ್ದೆಯನ್ನು ಒಂದು ಗ್ರೂಪ್ 'ಎ' ಹುದ್ದೆಗೆ ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 405 ವೆಚ್ಚ-5/2005, ದಿನಾಂಕ: 19.3.2005 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

ಪಿ.ಆರ್. 567

**ವಿಷಯ:** ಲೋಕೋಪಯೋಗಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಯೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 47 ಸಸಿವಿ 2002 ದಿನಾಂಕ: 26.7.2002.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 33 ಸಸಿವಿ 2004 ದಿನಾಂಕ: 18.2.2004.
3. ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ 67 ಪ್ರಕಾ 2005 ದಿನಾಂಕ: 10.3.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ದಿನಾಂಕ: 26.7.2002ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 4.7.2002 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸಲಾಗಿರುತ್ತದೆ. ಹಾಗೂ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ನಿಗದಿಪಡಿಸಲಾಗಿರುತ್ತದೆ.

| | | |
|---|---|---|
| 1. | ಆಪ್ತ ಕಾರ್ಯದರ್ಶಿ ಗ್ರೇಡ್-2 / ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2. | ಪತ್ರಾಂಕಿತ ಆಪ್ತ ಸಹಾಯಕ / ಹಿರಿಯ ಶೀಘ್ರಲಿಪಿಗಾರ | 2 ಹುದ್ದೆಗಳು |
| 3. | ಸಹಾಯಕ : ಕಿರಿಯ ಸಹಾಯಕ | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ದಿನಾಂಕ: 18.5.2004ರ ಸರ್ಕಾರಿ ಆದೇಶದಲ್ಲಿ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 31.3.2005 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಲೋಕೋಪಯೋಗಿ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಯವರು ಸದರಿ ಹುದ್ದೆಗಳನ್ನು ದಿನಾಂಕ: 1.4.2005ರ ನಂತರದ ಅವಧಿಗೆ ಮುಂದುವರೆಸಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 19 ಸಸಿವಿ 2005, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2005**

ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2005 ರಿಂದ ಒಂದು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1. | ಆಪ್ತ ಕಾರ್ಯದರ್ಶಿ ಗ್ರೇಡ್-2 / ಪತ್ರಾಂಕಿತ ಆಪ್ತ ಸಹಾಯಕ | 1 ಹುದ್ದೆ |
| 2. | ಪತ್ರಾಂಕಿತ ಆಪ್ತ ಸಹಾಯಕ / ಹಿರಿಯ ಶೀಘ್ರಲಿಪಿಗಾರ | 2 ಹುದ್ದೆಗಳು |
| 3. | ಸಹಾಯಕ : ಕಿರಿಯ ಸಹಾಯಕ | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

ಪಿ.ಆರ್. 568

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ಅಧಿಕೃತ ಜ್ಞಾಪನ ಸಂಖ್ಯೆ: ಪಸಂಮೀ 29 ಮೀಇಸೇ 2004, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2004**

**ವಿಷಯ:** ಮೀನುಗಾರಿಕೆ ಇಲಾಖೆಯಲ್ಲಿನ ಮೀನುಗಾರಿಕೆ ಜಂಟಿ ನಿರ್ದೇಶಕರು ವೃಂದಕ್ಕೆ ಸೇರಿದ ಅಧಿಕಾರಿಗಳ ದಿನಾಂಕ: 30.09.2004ಕ್ಕೆ ಇದ್ದಂತೆ **ಹಂಗಾಮಿ ಜೇಷ್ಠತಾ ಪಟ್ಟಿ ಪ್ರಕಟಿಸುವ ಬಗ್ಗೆ.**

ಮೀನುಗಾರಿಕೆ ಇಲಾಖೆಯಲ್ಲಿನ ಮೀನುಗಾರಿಕೆ ಜಂಟಿ ನಿರ್ದೇಶಕರು ವೃಂದಕ್ಕೆ ಸೇರಿದ ಅಧಿಕಾರಿಗಳ ದಿನಾಂಕ: 30.09.2004 ರಂದು ಇರುವಂತೆ ಕರ್ನಾಟಕ ಸರ್ಕಾರಿ ನೌಕರರ ಜೇಷ್ಠತಾ ನಿಯಮಾವಳಿ 1957ರ ನಿಯಮ 10(1)ರ ಪ್ರಕಾರ ಹಂಗಾಮಿ ಜೇಷ್ಠತಾ ಪಟ್ಟಿಯನ್ನು ಈ ಅಧಿಕೃತ ಜ್ಞಾಪನಕ್ಕೆ ಲಗತ್ತಿಸಲಾದ ಅನುಬಂಧದಲ್ಲಿ ತೋರಿಸಿರುವಂತೆ ತಯಾರಿಸಿ ಪ್ರಕಟಿಸಲಾಗಿದೆ. ಈ ಬಗ್ಗೆ **"ಬಾಧಿತರಾದವರು"** ತಮ್ಮ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸದರಿ ಹಂಗಾಮಿ ಜೇಷ್ಠತಾ ಪಟ್ಟಿ ಪ್ರಕಟಣೆಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಸೂಕ್ತ ದಾಖಲೆಗಳು ಹಾಗೂ ಮಾಹಿತಿಯೊಂದಿಗೆ ಮೀನುಗಾರಿಕೆ ನಿರ್ದೇಶಕರ ಮುಖಾಂತರ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ, ಬೆಂಗಳೂರು, ರವರಿಗೆ ಸಲ್ಲಿಸುವಂತೆ ಈ ಮೂಲಕ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಕಮಲಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**ದಿನಾಂಕ: 30.9.2004ಕ್ಕೆ ಇದ್ದಂತೆ ಮೀನುಗಾರಿಕೆ ಜಂಟಿ ನಿರ್ದೇಶಕರ ವೃಂದದ ಹಂಗಾಮಿ ಜೇಷ್ಠತಾ ಪಟ್ಟಿ ಬ್ಲಾಕ್ ಅನುಸಾರ ರಿಕ್ತ ಸ್ಥಾನಗಳ ಹಂಚಿಕೆ ವಿವರ**

| ಕ್ರ. ಸಂ. | ಬ್ಲಾಕ್ | ಬ್ಲಾಕ್ ಅವಧಿಯಲ್ಲಿ ಉದ್ಭವವಾದ ರಿಕ್ತ ಸ್ಥಾನಗಳು | ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಗದಿ ಪಡಿಸಲಾದ ಕೋಟಾ | ಕೋಟಾ ಪ್ರಕಾರ ಲಭ್ಯವಿರುವ ರಿಕ್ತ ಸ್ಥಾನಗಳು | | ವಾಸ್ತವವಾಗಿ ಭರ್ತಿ ಮಾಡಲಾದ ರಿಕ್ತ ಸ್ಥಾನಗಳು | | ಕೋಟಾ ಮಿತಿಯಲ್ಲಿ ಮಾಡಲಾದ ನೇಮಕಾತಿ | | ಹೆಚ್ಚುವರಿ ಕೊರತೆ | | ನಂತರದ ಬ್ಲಾಕ್‌ನಲ್ಲಿ ಹೊಂದಿಸಬೇಕಾದ ಹೆಚ್ಚುವರಿ ನೇಮಕಾತಿ | | ನೇಮಕಾತಿಗಳ ನಂತರ ಹೆಚ್ಚುವರಿ (+) ಕೊರತೆ (-) | | ಜೇಷ್ಠತೆ ಗಾಗಿ ಕ್ರಮ ಸಂಖ್ಯೆ |
|---|---|---|---|---|---|---|---|---|---|---|---|---|---|---|---|---|
| | | | | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 |
| ವೃಂದ ಮತ್ತು ನೇಮಕಾತಿ ನಿಯಮದ ಪ್ರಕಾರ ಮೀನುಗಾರಿಕೆ ಜಂಟಿ ನಿರ್ದೇಶಕರ ಹುದ್ದೆಗಳನ್ನು ಶೇಕಡ 100 ರಷ್ಟು ಮೀನುಗಾರಿಕೆ ಉಪ ನಿರ್ದೇಶಕರ ಹುದ್ದೆಯಿಂದ ಮುಂಬಡ್ತಿ ಮೂಲಕ ಭರ್ತಿ ಮಾಡಬೇಕಾಗಿರುವುದರಿಂದ ಈ ಹುದ್ದೆಗಳಿಗೆ ವರ್ಗೀಕರಣ ಅನ್ವಯಿಸುವುದಿಲ್ಲ. | | | | | | | | | | | | | | | | |

**ಡಿ. ಕಮಲಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**ಅನುಬಂಧ-2**

**ದಿನಾಂಕ: 30.9.2004ಕ್ಕೆ ಇದ್ದಂತೆ ಮೀನುಗಾರಿಕೆ ಜಂಟಿ ನಿರ್ದೇಶಕರ ವೃಂದದ ಹಂಗಾಮಿ ಜೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು | ನೇರ ನೇಮಕಾತಿ: ಮುಂಬಡ್ತಿ ಇತರೆ | ಮೀಸ ಲಾತಿ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿ/ಜೇಷ್ಟತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | **ಶ್ರೀಯುತರು:** | | | | | | | |
| 1 | ಕೆ. ಶ್ಯಾಮಭಟ್ | ಮುಂಬಡ್ತಿ | - | 19.04.1943 | 23.05.1969 | 04.07.1991 | 01.06.1991 (ದಿ: 30.04.01 ರಂದು ವಯೋನಿವೃತ್ತಿ ಹೊಂದಿರುತ್ತಾರೆ) | ಶ್ರೀ ಚಂದ್ರಶೇಖರಯ್ಯರವರ ವಯೋನಿವೃತ್ತಿಯಿಂದ ತೆರವಾದ ಹುದ್ದೆ |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 2 | ಹೆಚ್.ಎಸ್. ವೀರಪ್ಪಗೌಡ | ಮುಂಬಡ್ತಿ | - | 26.09.1958 | 13.02.1985 | 24.03.1997 | 01.07.1994 (ದಿ: 29.04.02 ರಂದು ಮೀನುಗಾರಿಕೆ ನಿರ್ದೇಶಕರಾಗಿ ಬಡ್ತಿಯನ್ನು ಹೊಂದಿರುತ್ತಾರೆ) | ಶ್ರೀ ಷೊಯಿಟ್ ಅಹ್ಮದ್ ಖಾನ್ ರವರ ವಯೋನಿವೃತ್ತಿಯಿಂದ ತೆರವಾದ ಹುದ್ದೆ |
| 3 | ಕೆ. ಗಣಪತಿ ಭಟ್ | ಮುಂಬಡ್ತಿ | - | 28.12.1957 | 01.04.1982 | 28.06.2002 | 01.10.1995 | ಶ್ರೀ ಅಡವಿರಾವ್‌ರವರ ವಯೋನಿವೃತ್ತಿಯಿಂದ ತೆರವಾದ ಹುದ್ದೆ |
| 4 | ಡಾ: ಎಂ.ಜಿ. ಜಯರಾಂ | ಮುಂಬಡ್ತಿ | - | 25.04.1952 | 25.07.1982 | 28.06.2002 | 01.04.1996 | ಶ್ರೀ ಎಸ್. ಚಂದ್ರಶೇಖರಪ್ಪರವರ ವಯೋನಿವೃತ್ತಿಯಿಂದ ತೆರವಾದ ಹುದ್ದೆ. |
| 5 | ಡಾ: ಸಿ.ಕೆ. ಮೂರ್ತಿ | ಮುಂಬಡ್ತಿ | - | 20.10.1957 | 01.04.1982 | 28.06.2002 | 01.01.2000 | ಶ್ರೀ ಅಬ್ದುಲ್ ಹಮೀದ್‌ರವರ ಪದೋನ್ನತಿಯಿಂದ ತೆರವಾದ ಹುದ್ದೆ |
| 6 | ವಿಚಿತ್ರ ಕುಮಾರ್ ಶೆಟ್ಟಿ | ಮುಂಬಡ್ತಿ | - | 18.07.1957 | 12.04.1982 | 28.06.2002 | 01.05.2001 | ಶ್ರೀ ಕೆ. ಶ್ಯಾಮ್‌ಭಟ್‌ರವರ ವಯೋನಿವೃತ್ತಿಯಿಂದ ತೆರವಾದ ಹುದ್ದೆ. |
| 7 | ಗಂಗಾಧರ ವಿ. ಮಡ್ಡಿಕೇರಿ | ಮುಂಬಡ್ತಿ | - | 22.06.1957 | 12.03.1982 | 28.06.2002 | 29.04.2002 | ಶ್ರೀ ಹೆಚ್.ಎಸ್. ವೀರಪ್ಪಗೌಡರವರ ಪದೋನ್ನತಿಯಿಂದ ತೆರವಾದ ಹುದ್ದೆ |
| 8 | ಡಾ: ಎನ್.ಆರ್. ರಾಮಕೃಷ್ಣ | ಮುಂಬಡ್ತಿ | - | 20.04.1956 | 11.03.1982 | 28.06.2002 | 19.06.2003 | ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ 6 ಮೀನುಗಾರಿಕೆ ಜಂಟಿ ನಿರ್ದೇಶಕರ ಹುದ್ದೆಗಳು ಮಂಜೂರಾಗಿದ್ದು ಅದರಲ್ಲಿ ದಿನಾಂಕ: 01.04.1996 ರಿಂದ ಯೋಜನಾ ನಿರ್ದೇಶಕರು, ಭಾರತ್ ಡೆನ್ಮಾರ್ಕ್ ಯೋಜನೆ, ತದಡಿ, ಹುದ್ದೆಯನ್ನು ಮುಂದುವರೆಸಲಾಗಿಲ್ಲ/ಕೈಬಿಡಲಾಗಿದೆ. ಆದರೆ ಸರ್ಕಾರಿ ಆದೇಶ ಸಂಖ್ಯೆ: ಅಪಜೀ/125/ಇಎನ್‌ವಿ/2003 ದಿ: 19.06.2003 ರಲ್ಲಿ ಅರಣ್ಯ ಮತ್ತು ಪರಿಸರ ಇಲಾಖೆಯಡಿ ಬರುವ ರಾಜ್ಯ ಜೀವಿ ವೈವಿಧ್ಯ ಮಂಡಳಿ, ಬೆಂಗಳೂರು, ಇಲ್ಲಿ ಒಂದು ಎಕ್ಸಕ್ಯೂಟಿವ್ ಆಫೀಸರ್ (ಮೀನುಗಾರಿಕೆ), ಹುದ್ದೆಯನ್ನು ಸೃಜಿಸಲಾಗಿದ್ದು ಇದನ್ನು ಮೀನುಗಾರಿಕೆ ಇಲಾಖೆ ಜಂಟಿ ನಿರ್ದೇಶಕರ ಹುದ್ದೆಯಿಂದ ನಿಯೋಜನೆ ಮೇಲೆ ಭರ್ತಿ ಮಾಡಲು ಅವಕಾಶವಿದೆ. |

**ಡಿ. ಕಮಲಕುಮಾರ್**

ಪಿ.ಆರ್. 1431

ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).